# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 16ನೇ ಸಂಚಿಕೆ ಕೊಪ್ಪ 13-12-1987 ಭಾನುವಾರ ಬೆಲೆ 50 ಪೈಸೆ


ಕಲಬೆರಕೆ ಹೆಂಡ-ಸಾರಾಯಿ ಬದಲು ವಸತಿ ಶಾಲೆ :

## ಮುಖ್ಯಮಂತ್ರಿಗೆ ದ. ಸಂ. ಸ. ಒತ್ತಾ[ಯ]

ಚಿಕ್ಕಮಗಳೂರು : ಸರ್ಕಾರ ಸರಬರಾಜು ಮಾಡುತ್ತಿರುವ ಕಲಬೆರಕೆಯ ಹೆಂಡ-ಸಾರಾಯಿಯ ಬದಲು ಪ್ರತೀ ಹೋಬಳಿಗೊಂದು ವಸತಿ ಶಾಲೆ ಆರಂಭಿಸುವಂತೆ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಶಾಖೆ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರನ್ನು ಇಲ್ಲಿ ಒತ್ತಾಯಿಸಿತು.

ದಕ್ಷಿಣ ವಲಯ ಕ್ರೀಡಾ ಕೂಟ[ವ] ಉದ್ಘಾಟಿಸಲು ಡಿ. 9 ರಂದು ಇಲ್ಲಿಗೆ [ಬ]ದ್ದಾಗ ಅವರನ್ನು ಭೇಟಿ ಮಾಡಿ ಮ[ನ]ವಿ ಪತ್ರ ಸಲ್ಲಿಸಿದ ದ. ಸಂ. ಸಮಿತಿಯು, [ಈ] ರೀತಿಯ ಮದ್ಯ ಸೇವನೆ ಬಡ ಜನರ ಆ[ರ್ಥಿ]ಕ ಅಭಿವೃದ್ಧಿಗೆ ಮಾರಕವಾಗಿರುವ[ದು] ಮಾತ್ರವಲ್ಲ, ಅವರ ಆರೋಗ್ಯಕ್ಕೂ ಹಾ[ನಿ]ಕರವಾಗಿದೆ. ಅದನ್ನು ರದ್ದು ಮಾಡಿ ಹೋ[ಬ]ಳಿಗೊಂದು ವಸತಿ ಶಾಲೆ ನಿರ್ಮಿಸುವಂ[ತೆ] 2 ವರ್ಷದಿಂದ ಒತ್ತಾಯಿಸುತ್ತಿದ್ದರೂ [ಸ]ರ್ಕಾರ ಈ ಬಗ್ಗೆ ಸ್ಪಷ್ಟ ಅಭಿಪ್ರಾಯ [ತಿಳಿಸಿ]ದಿಲ್ಲ. ಹೆಂಡವನ್ನು ರದ್ದು ಮಾಡಿದರೆ ಸರ್ಕಾ[ರ]ಕ್ಕೆ ಆದಾಯ ಕಡಿಮೆಯಾಗಬಹುದು. ಆ[ದ]ರೆ ಜನರ ಮಾನ, ಪ್ರಾಣ ರಕ್ಷಣೆ ಮಾಡು[ವು]ದು ಸರ್ಕಾರದ ಆದ್ಯ ಕರ್ತವ್ಯ. ಆದ್ದರಿಂದ ವಸತಿ ಶಾಲೆಯ ಬೇಡಿಕೆಯನ್ನು ಶೀಘ್ರವೇ ಈಡೇರಿಸುವಂತೆ ಒತ್ತಾಯಿಸಿದೆ.

ಬೆಳಗಾವಿ ಜಿಲ್ಲೆ ಬೆಂಡಿಗೇರಿಯಲ್ಲಿ ಹರಿಜನರಿಗೆ ಮಲ ತಿನ್ನಿಸಿದ, ಬಿಜಾಪುರ ಜಿಲ್ಲೆಯ ನರಸಲಗಿ ಗ್ರಾಮದಲ್ಲಿ ದಲಿತರಿಗೆ ಸಾಮಾಜಿಕ ಬಹಿಷ್ಕಾರ ವಿಧಿಸಿರುವ, ಗುಲ್ಬರ್ಗ ಜಿಲ್ಲಾ ಪರಿಷತ್ ಸದಸ್ಯ ಲಕ್ಷ್ಮಣ ನಾಯಕ್ ಮತ್ತು ಶಿವಮೊಗ್ಗ ಜಿಲ್ಲೆ ಚನ್ನಗಿರಿಯಲ್ಲಿ ದಲಿತನೊಬ್ಬನನ್ನು (ಎರಡೂ ನವೆಂಬರ್ ತಿಂಗಳಲ್ಲಿ ನಡೆದಂಥವು) ಕೊಲೆಗೈದ ಅಪರಾಧಿಗಳ ಮೇಲೆ ಉಗ್ರ ಕ್ರಮ ಕೈಗೊಳ್ಳಬೇಕೆಂದು ಸಮಿತಿ ಮುಖ್ಯಮಂತ್ರಿಗಳನ್ನು ಒತ್ತಾಯಿಸಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಶ್ರೀಮಂತರು ಒತ್ತುವರಿಯಿಂದ ಅಕ್ರಮ ಸಾಗುವಳಿ ಮಾಡುತ್ತಿರುವ ಸಾವಿರಾರು ಎಕರೆ ಭೂಮಿಯನ್ನು ತೆರವು ಮಾಡಿಸಿ, ಭೂ ಹೀನ ಬಡವರಿಗೆ ಹಂಚಬೇಕೆಂದೂ ಸಮಿತಿ ಆಗ್ರಹಿಸಿದೆ.

ಚಿಕ್ಕಮಗಳೂರಲ್ಲಿ ದಲಿತ ಕಾಲೇಜ್ ವಿದ್ಯಾರ್ಥಿನಿಯರಿಗಾಗಿ ಹಾಸ್ಟೆಲ್ ಆರಂಭಿಸಬೇಕು, ದಲಿತ ವಿದ್ಯಾರ್ಥಿಗಳಿಗೆ ಕೊಡುತ್ತಿರುವ ವಿದ್ಯಾರ್ಥಿ ವೇತನವನ್ನು ಜೀವನ ವೆಚ್ಚದ ಏರಿಕೆಗೆ ಅನುಗುಣವಾಗಿ ಹೆಚ್ಚಿಸಬೇಕು, ಹಾಸ್ಟೆಲ್‌ಗಳಿಗೆ ಕಟ್ಟಡ, ಪುಸ್ತಕ, ಬಟ್ಟೆ ಮತ್ತಿತರ ಸೌಲಭ್ಯಗಳನ್ನು ಒದಗಿಸಬೇಕು ಎಂದೂ ಮನವಿಯಲ್ಲಿ ಒತ್ತಾಯಿಸಲಾಗಿದೆ.

### ಅಧಿಕಾರ ಬಲದ ಪ್ರದರ್ಶನ ?

ನ. ರಾ. ಪುರ : ಇಲ್ಲಿ ಈಚೆಗೆ ನಡೆದ ಪ್ರಸಂಗವೊಂದು ಅಧಿಕಾರ ಬಲದ ದರ್ಪವೊ ಹೇಗೆಂಬುದನ್ನು ಓದುಗರೇ ವಿವೇಚಿಸಬಹುದು.

ಮಂಡಲ ಪ್ರಧಾನರೊಬ್ಬರು ಬಸ್ ಸ್ಟ್ಯಾಂಡಿನಲ್ಲಿ ನಿಂತಿದ್ದರು. ಖಾತೆದಾರರೊಬ್ಬರಿಗೆ ಅವರಿಂದ ಸಹಿ ಆಗಬೇಕಿತ್ತು. ಸಿಕ್ಕಿದರಲ್ಲ, ಮಾಮೂಲಿನಂತೆ ಕೇಳಿಯೇಬಿಟ್ಟರು—"ಸ್ವಾಮಿ, ಸ್ವಲ್ಪ ರುಜು ಆಗಬೇಕಿತ್ತು...."

ಆದರೆ ಪ್ರಧಾನರು ಈಗ ಹಿಂದಿನ ಹಾಗಾ, ಸಿಕ್ಕಿಸಿಕ್ಕಿದಲ್ಲೆಲ್ಲ ಸಹಿ ಹಾಕಲಿಕ್ಕೆ? ಜರ್ಬಿದರು—"ಕಛೇರಿಗೆ ಬನ್ರೀ. ಸೀಲ್ ಇಟ್ಕೊಂಡಿಲ್ಲ. ಸಿಕ್ ಸಿಕ್ಕಲ್ಲೆಲ್ಲ ಉಜ್ಜಿ ಹೊಯ್ಯಲಿಕ್ಕೆ ಆಗುತ್ತೇನ್ರಿ....?"

ಈ ಮಾತಿನ ಮಹಾಪೂರ ಕಂಡು ಸುತ್ತಲಿದ್ದ ಜನ ನಗು ತಡೆಯಲಾರದೆ, ನಗಲೂ ಆಗದೆ ಉಗುಳು ನುಂಗಿಕೊಂಡರು.

ಇದು ಅಧಿಕಾರದಲ್ಲಿ ಪಳಗಿದ ಹುಲಿಯ ಲಕ್ಷಣವೆ ? ಏನೆನ್ನುವಿರಿ ?

(ಎಸ್. ಎನ್. ಮಹಾಬಲ ರಾವ್)

ದ. ವಲಯ ಅಥ್ಲೆಟಿಕ್ಸ್ ಸಮಾರೋಪ ಸಮಾರಂಭದಲ್ಲಿ

## ಈಶನ್, ಉಷಾಗೆ ಸನ್ಮಾನ

(ವರದಿ : ಎಸ್. ಡಿ ಮನೋಜ್)

**ಚಿಕ್ಕಮಗಳೂರು : ಇಲ್ಲಿ ಡಿ. 9, 10 ಮತ್ತು 11ರಂದು ನಡೆದ ದಕ್ಷಿಣ ವಲಯ ಅಥ್ಲೆಟಿಕ್ಸ್ ಕೂಟದ ಸಮಾರೋಪ ಸಮಾರಂಭದಲ್ಲಿ ರಾಷ್ಟ್ರೀಯ ಕ್ರೀಡಾಪಟು, ಶಾಟ್‌ಪಟ್ ಪ್ರವೀಣ, ಕೊಪ್ಪದ ಎಸ್. ಡಿ. ಈಶನ್ ಹಾಗೂ ಪಿ. ಟಿ. ಉಷಾ, ವಂದನಾ ರಾವ್ ಸೇರಿದಂತೆ ದ. ವಲಯಕ್ಕೆ ಸೇರಿದ ಇನ್ನಿತರ ಕೆಲವು ಮಂದಿ ರಾಷ್ಟ್ರೀಯ ಕ್ರೀಡಾಪಟುಗಳನ್ನು ಸನ್ಮಾನಿಸಲಾಯಿತು.**

ಸನ್ಮಾನಿತರಾದ ಇನ್ನಿತರರು: ಗುಣವತಿ (800 ಮೀ.), ಡಿ.ಪಿ.ಉಮಾದೇವಿ (ದೂರ ಓಟ) (ಇಬ್ಬರೂ ಚಿಕ್ಕಮಗಳೂರಿನವರು), ಸತ್ಯನಾರಾಯಣ (ದೂರ ಓಟ) ಮತ್ತು ಸೌಂದರ್ ರೂಬೆನ್ (ವೇಗದ ಓಟ). ಸಚಿವ ಪಿ.ಜಿ.ಆರ್. ಸಿಂಧ್ಯರವರು ಇವರಿಗೆಲ್ಲ ನನೆಪಿನ ಕಾಣಿಕೆಗಳನ್ನಿತ್ತು ಸನ್ಮಾನಿಸಿದರು

ಬಿ. ಎಲ್. ಶಂಕರ್ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಜೆ. ಎಚ್. ಪಟೇಲ್ ಮುಖ್ಯ ಅತಿಥಿಯಾಗಿದ್ದರು. ಸಮಾರಂಭದ ಕೊನೆಯಲ್ಲಿ ಮನರಂಜನಾ ಕಾರ್ಯಕ್ರಮಗಳು ನಡೆದವು. ಶಾಲಾ ಮಕ್ಕಳು ಹಾಡಿದ "ಸಾರೇ ಜಹಾಂ ಸೇ ಅಚ್ಛಾ" ಸಮೂಹ ಗೀತೆ ಬಹಳ ಮೆಚ್ಚುಗೆ ಗಳಿಸಿತು.

### ಆತ್ಮೀಯ ಬೀಳ್ಕೊಡುಗೆ

ಕೊಪ್ಪ : ಇಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಪ್ರಯೋಗಾಲಯ ಸಹಾಯಕರಾಗಿ 40 ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿ ಈಚೆಗೆ ನಿವೃತ್ತರಾದ ವೀರಪ್ಪನವರಿಗೆ ಕಾಲೇಜಿನ ಪ್ರಿನ್ಸಿಪಾಲ್ ಎಂ. ಮೋಹನದಾಸ್ ಭಟ್‌ರವರ ಅಧ್ಯಕ್ಷತೆಯಲ್ಲಿ ಅಧ್ಯಾಪಕರು ಹಾಗೂ ಸಿಬ್ಬಂದಿ ವರ್ಗದವರು ಬೀಳ್ಕೊಡಿಗೆ ಸಮಾರಂಭ ಏರ್ಪಡಿಸಿದ್ದರು. ವೀರಪ್ಪನವರ ಪ್ರಾಮಾಣಿಕ ಹಾಗೂ ದೀರ್ಘಾವಧಿ ಸೇವೆಯನ್ನು ಪ್ರಶಂಸಿಸಿ, ನೆನಪಿನ ಕಾಣಿಕೆ ನೀಡಿ, ಅವರ ನಿವೃತ್ತ ಜೀವನವು ಶುಭಕರವಾಗಿರಲೆಂದು ಹಾರೈಸಿ ಆತ್ಮೀಯವಾಗಿ ಬೀಳ್ಕೊಟ್ಟರು.

(ವರದಿ : ಹಾ. ಅ. ಗೋಪಾಲ್.)

## ಗೀತಾ, ಯಶೋದಾಗೆ ಅಥ್ಲೆಟಿಕ್ಸ್ ಪ್ರಶಸ್ತಿ

ಕೊಪ್ಪ : ಈಚೆಗೆ ನಡೆದ ಕುವೆಂಪು ವಿಶ್ವವಿದ್ಯಾ ನಿಲಯದ ಪ್ರಪ್ರಥಮ ಅಥ್ಲೆಟಿಕ್ಸ್ ಕ್ರೀಡಾಕೂಟದಲ್ಲಿ ಕೊಪ್ಪ ಪ್ರ. ದ. ಕಾಲೇಜಿನ ಯಶೋದಾ ಮಹಿಳೆಯರ ಹೆಪ್ಟಾತ್ಲಾನ್‌ನಲ್ಲಿ ಪ್ರಥಮ ಸ್ಥಾನ ಮತ್ತು ಹೈಜಂಪ್‌ನಲ್ಲಿ ಬೆಳ್ಳಿ ಪದಕವನ್ನು ಗಳಿಸಿದ್ದಾರೆ.

ಇದೇ ಕೂಟದಲ್ಲಿ ಚಿಕ್ಕಮಗಳೂರಿನ ಕ್ರೀಡಾ ಹಾಸ್ಟೆಲ್ ಮತ್ತು ಎಸ್.ಟಿ.ಜೆ. ಮಹಿಳಾ ಕಾಲೇಜು ವಿದ್ಯಾರ್ಥಿನಿಯಾದ ಕೊಪ್ಪದ ಜಿ. ಎಸ್. ಗೀತಾ 1500 ಮೀ. ಮತ್ತು 3000 ಮೀ. ಓಟಗಳಲ್ಲಿ ಮೊದಲ ಸ್ಥಾನ ಗಳಿಸಿದ್ದಾರೆ.

### ರಾಜ್ಯ ಕ್ರೀಡಾ ಕೂಟದಲ್ಲಿ ಡಿಂಪಲ್‌ಗೆ 3ನೇ ಸ್ಥಾನ

ಡಿ. 5 ಮತ್ತು 6ರಂದು ಹುಬ್ಬಳ್ಳಿಯಲ್ಲಿ ನಡೆದ ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಗಳ ಕ್ರೀಡಾ ಕೂಟದಲ್ಲಿ ಕೊಪ್ಪದ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಡಿಂಪಲ್ ಅಜಿಲ ಚಕ್ರ ಎಸೆತದ ಸ್ಪರ್ಧೆಯಲ್ಲಿ 23.94 ಮೀ. ದೂರ ಎಸೆದು 3ನೇ ಸ್ಥಾನ ಗಳಿಸಿದ್ದಾಳೆ. ಜಿಲ್ಲೆಯಿಂದ ಭಾಗವಹಿಸಿದ್ದ 23 ಕ್ರೀಡಾ ಪಟುಗಳಲ್ಲಿ ಬಂದಿರುವ ಬಹುಮಾನ ಇದೊಂದೇ ಆಗಿದೆ.

# "ಪಶ್ಚಿಮ ಘಟ್ಟ ಉಳಿಸಿ" ಪಾದಯಾತ್ರೆ: ಪ್ರೇರಣೆ, ಯೋಜನೆ ಮತ್ತು ಗುರಿ

**ಪೂರ್ವ ಕಾಲದಲ್ಲಿ ಜನಸಾಂದ್ರತೆ ಕಡಿಮೆಯಿದ್ದುದು ಮಾತ್ರವಲ್ಲ; ತಮ್ಮ ಜೀವನಕ್ಕೆ ಆಧಾರವಾದ ಸುತ್ತಲಿನ ಪ್ರಕೃತಿಯ ಪ್ರತಿಯೊಂದನ್ನೂ—ಕಾಡು, ಪಶು ಪಕ್ಷಿಗಳು, ನೀರಿನ ಆಸರೆಗಳು, ಹೀಗೆ ಪ್ರತಿಯೊಂದನ್ನೂ—ಅವುಗಳ ಅಸ್ತಿತ್ವಕ್ಕೆ ಧಕ್ಕೆ ಬಾರದಂತೆ ಹಿತಮಿತವಾಗಿ ಬಳಸಿಕೊಳ್ಳುವುದು ಜನಜೀವನದ ರೂಢಿಗಳಲ್ಲೇ ಅಡಕವಾಗಿತ್ತು. ಹಾಗಾಗಿ ಅವುಗಳ ಸಂರಕ್ಷಣೆಗಾಗಿ ಪ್ರತ್ಯೇಕ ಕಾನೂನುಗಳ ಅಗತ್ಯವಿರಲಿಲ್ಲ, ಹೋರಾಟಗಳು ಬೇಕಾಗಿರಲಿಲ್ಲ.**

**ಆದರೆ ಇಂದು ಹಾಗಿಲ್ಲ. ನಮ್ಮ ಸಮಾಜ ಜೀವನದಲ್ಲಿ ಬಳಿತಿನ ಪ್ರತಿಯೊಂದು ವಿಷಯದಲ್ಲೂ ಸೂತ್ರ ತಪ್ಪಿದೆ. ಯಾವುದಕ್ಕೂ ಗೊತ್ತು ಗುರಿಯಿಲ್ಲ. ಸಮಾಜದೊಳಗೆ ವೈಯಕ್ತಿಕ ಮತ್ತು ಸಾಮೂಹಿಕ ಜವಾಬ್ದಾರಿಯ ನೀತಿ-ಕಟ್ಟಳೆಗಳೆಲ್ಲ ಹರಿದು ಮಣ್ಣುಗೂಡಿ ಹೋಗಿವೆ. ಈಗ ಪ್ರತಿಯೊಬ್ಬನಿಗೂ ತನ್ನೊಬ್ಬನ ತಕ್ಷಣದ ಆಸೆ ಅಥವಾ ಅಗತ್ಯದ ಈಡೇರಿಕೆ ಮಾತ್ರ ನೀತಿಯಾಗಿದೆ. ಅದನ್ನು ಸಾಧ್ಯವಾಗಿಸಿಕೊಳ್ಳಲು ಮಾತ್ರ—ಅಂದರೆ ದುಷ್ಟತನಕ್ಕೆ ಮಾತ್ರ—ಸುಲಭವಾಗಿ ಕೂಟಗಳು ಕೂಡುತ್ತವೆ. ಒಳಿತನ್ನು ಸಾಧಿಸಲು ಸಂಘಟಿತ ಪ್ರಯತ್ನ ಬಹಳ ಕಷ್ಟದ್ದಾಗಿದೆ.**

**ಇಂಥ ಸಾಮೂಹಿಕ ಹಿತದ, ಸಮಾಜಕ್ಕೆ ಭವಿಷ್ಯದಲ್ಲಿ ಒಳಿತಾಗುವ ಒಂದು ಪ್ರಯತ್ನ ಪರಿಸರ ಸಂರಕ್ಷಣೆಯದು. ಆದಕ್ಕಾಗಿ ಅಲ್ಲಲ್ಲಿ ಕಳೆದ ಕೆಲವು ವರ್ಷಗಳಿಂದ ಆರಂಭವಾದ ಬಿಡಿ ಬಿಡಿ ಪ್ರಯತ್ನಗಳು ಇದೀಗ ಸಂಘಟಿತ ರೂಪು ಪಡೆಯುತ್ತಿವೆ. "ಪಶ್ಚಿಮ ಘಟ್ಟ ಉಳಿಸಿ" ಚಳುವಳಿ ಇಂಥವುಗಳಲ್ಲೊಂದು. ಅದರ ಹಿನ್ನೆಲೆ, ಮುನ್ನೋಟಗಳ ಸಂಕ್ಷಿಪ್ತ ಪರಿಚಯ ಈ ಲೇಖನದಲ್ಲಿದೆ.**

**ಬಿ. ಎಸ್. ವಿದ್ಯಾನಂದ ಭಟ್,**
ಸಂಚಾಲಕರು,
"ಪಶ್ಚಿಮ ಘಟ್ಟ ಉಳಿಸಿ"
ಆಂದೋಲನ ಸಮಿತಿ,
ಚಿಕ್ಕಮಗಳೂರು ಜಿಲ್ಲೆ.

1986ರಲ್ಲಿ ದಕ್ಷಿಣ ಭಾರತದಲ್ಲಿ ಪರಿಸರ ಸಂರಕ್ಷಣೆ ಕ್ಷೇತ್ರದಲ್ಲಿ ಕಾರ್ಯನಿರತರಾಗಿರುವ ಸ್ವಯಂ ಸೇವಾ ಸಂಸ್ಥೆಗಳ ಕೆಲವು ಕಾರ್ಯಕರ್ತರು ಗೋವಾದಲ್ಲಿ ಸೇರಿದ್ದರು. ಈ ಭಾಗದ ಜನಜೀವನ, ಆರ್ಥ ವ್ಯವಸ್ಥೆಗಳಿಗೆ ಪಶ್ಚಿಮ ಘಟ್ಟಗಳ ಕೊಡುಗೆ ಮತ್ತು ಅದರ ಮಹತ್ವದ ಬಗ್ಗೆ ಅಪೂರ್ವ ಚರ್ಚೆ ನಡೆಯಿತು.

ಕೇರಳ, ಕರ್ನಾಟಕ, ಗೋವಾ ಹಾಗೂ ಮಹಾರಾಷ್ಟ್ರ ರಾಜ್ಯಗಳನ್ನು ಆವರಿಸಿರುವ ಪಶ್ಚಿಮ ಘಟ್ಟಗಳು ದಕ್ಷಿಣ ಭಾರತ ಕೃಷಿ ಭೂಮಿಗೆ ನೀರು ಹರಿಸುವ ಪ್ರಮುಖ ಪೂರ್ವ ವಾಹಿನಿ ನದಿಗಳಿಗೆ ಉಗಮ ಸ್ಥಾನಗಳು. ಅಧಿಕ ಮಳೆ ಬೀಳುವ ಈ ಗುಡ್ಡ, ಕಾಡುಗಳು; ಅಮೂಲ್ಯ ವನಸ್ಪತಿಗಳು, ವೃಕ್ಷ ಸಂಪತ್ತು ಹಾಗೂ ವೈವಿಧ್ಯಮಯ ಪ್ರಾಣಿಗಳಿಗೆ ಆಶ್ರಯ ತಾಣಗಳಾಗಿವೆ. ಭತ್ತ, ಕಾಫಿ, ರಬ್ಬರ್, ಮೆಣಸು, ಏಲಕ್ಕಿ, ಅಡಿಕೆ ಹಾಗೂ ತೆಂಗಿನ ವಿಸ್ತೃತ ತೋಟಗಳು ಈ ಪ್ರದೇಶದಲ್ಲೇ ಇವೆ. ಪಶ್ಚಿಮ ಘಟ್ಟಗಳು ದಕ್ಷಿಣ ಭಾರತದ, ವಿಶೇಷವಾಗಿ ಕರ್ನಾಟಕದ ಆರ್ಥವ್ಯವಸ್ಥೆ ಮತ್ತು ಪರಿಸರ ಸಮತೋಲನದ ಬೆನ್ನೆಲುಬಾಗಿವೆ.

ಪ್ರಗತಿಯ ಹೆಸರಿನಲ್ಲಿ ನಮ್ಮ ರಾಜ್ಯದ ಜೀವನಾಡಿಯಾದ ಪಶ್ಚಿಮ ಘಟ್ಟಗಳ ಮೇಲೆ ಸತತ ಪ್ರಹಾರ ನಡೆದಿದೆ. ವಿದ್ಯುತ್ ಪೂರೈಕೆಗೆ, ನೀರಾವರಿ ಯೋಜನೆಗಳಿಗೆ, ಬೃಹತ್ ಉದ್ದಿಮೆಗಳಿಗೆ ಈಗಾಗಲೇ ಲಕ್ಷಾಂತರ ಎಕರೆ ಆರಣ್ಯ ಪ್ರದೇಶ ನಾಶವಾಗಿದೆ. ಸಿರಿವಂತ ನಗರವಾಸಿಗಳು ಮತ್ತು ಪರದೇಶದವರ ಅಭಿರುಚಿಯನ್ನು ತಣಿಸುವುದಕ್ಕಾಗಿ ತೇಗ, ಗಂಧ ಮುಂತಾದ ಮರಗಳನ್ನು ನಿರ್ದಾಕ್ಷಿಣ್ಯವಾಗಿ ಕಡಿಯಲಾಗಿದೆ.

ಪಶ್ಚಿಮ ಘಟ್ಟದ ದ್ದಕ್ಕೂ ನಮ್ಮ ನದಿಗಳನ್ನು, ಗಾಳಿಯನ್ನು ಮಲಿನ ಮಾಡುವ, ಜನರು ಸಾಮೂಹಿಕ ಭೂಮಿಯನ್ನು ಕಿತ್ತುಕೊಳ್ಳುವ ಹಾಗೂ ಭೀಕರ ಅಣುಸ್ಥಾವರಗಳನ್ನು ನಿರ್ಮಿಸುವ ಕಾರ್ಯಗಳು ಬೆಳೆಯುತ್ತಲೇ ಇವೆ. ಇವೆಲ್ಲವೂ ಮುಂದುವರಿದರೆ, ದೀರ್ಘಾವಧಿಯಲ್ಲಿ ಈ ಪ್ರದೇಶದ ಸಸ್ಯ ಹಾಗೂ ಜೀವ ವ್ಯವಸ್ಥೆಯೇ ಪಲ್ಲಟಗೊಂಡು, ಈ ಭಾಗ ಒಂದು ಮರಳುಗಾಡಾಗುವ ಭೀತಿ ಇದೆ.

ಗೋವಾದಲ್ಲಿ ನಡೆದ ಈ ಚರ್ಚೆಯಲ್ಲಿ ಒಂದು ವಿಷಯ ಮನದಟ್ಟಾಯಿತು : ಈ ಪ್ರದೇಶದ ವನಸಿರಿಯನ್ನು ಉಳಿಸಿಕೊಳ್ಳಲು ಘಟ್ಟದಲ್ಲಿನ ನಿವಾಸಿಗಳೇ ಜಾಗೃತರಾಗಬೇಕು. ಈ ದಿಶೆಯಲ್ಲಿ ಸಂಘಟಿತ ಪ್ರಯತ್ನ ನಡೆಸುವುದಕ್ಕಾಗಿ ಹಾಗೂ ಜನಸಾಮಾನ್ಯರನ್ನು ಪ್ರೇರೇಪಿಸುವುದಕ್ಕಾಗಿ "ಪಶ್ಚಿಮ ಘಟ್ಟ ಉಳಿಸಿ" ಪಾದಯಾತ್ರೆಯನ್ನು ಯೋಜಿಸಲಾಗಿದೆ. ಈ ಯೋಜನೆಯಲ್ಲಿ ಪಾಲ್ಗೊಳ್ಳಲು 145ಕ್ಕಿಂತಲೂ ಹೆಚ್ಚು ಸಂಘ ಸಂಸ್ಥೆಗಳು ಮುಂದಾಗಿವೆ.

ಈ ಪಾದಯಾತ್ರೆ ಪಶ್ಚಿಮ ಘಟ್ಟಗಳ ಉತ್ತರ ಹಾಗೂ ದಕ್ಷಿಣದ ಎರಡು ತುದಿಗಳಿಂದ ಈಗಾಗಲೇ ನವೆಂಬರ್ 1ನೇ ತಾರೀಖಿನಿಂದ ಪ್ರಾರಂಭವಾಗಿದೆ. ಸುಮಾರಾಗಿ ಮೂವತ್ತು ಜನರು ಒಂದೊಂದು ತಂಡದಲ್ಲಿರುವ ಈ ಯಾತ್ರೆ ಒಂದು ನೂರು ದಿನಗಳ ಪರ್ಯಂತ ನಡೆದು ಗೋವಾದ ಪೋಂಡಾದಲ್ಲಿ ಸೇರಲಿದೆ.

ಈ ಪಾದಯಾತ್ರೆಯಲ್ಲಿ ಅಲ್ಲಲ್ಲಿ ಸಾಂಕೇತಿಕವಾಗಿ ಪರಿಸರ ತಜ್ಞರು, ರಾಷ್ಟ್ರ ಮಟ್ಟದ ಪ್ರತಿಷ್ಠಿತ ವ್ಯಕ್ತಿಗಳೂ ಆದ ಚಂಡಿ ಪ್ರಸಾದ್ ಭಟ್, ಡಾ|| ಶಿವರಾಮ ಕಾರಂತ, ಡಾ|| ಮಾಧವ ಗಾಡ್ಗೀಳ್, ಡಾ|| ಕೈಲಾಸ್ ಮಲ್ಹೋತ್ರ, ಅನಿಲ್ ಅಗರ್ವಾಲ, ಶ್ರೀಮತಿ ಸುಗಥಾ ಕುಮಾರಿ ಮುಂತಾದವರು ಭಾಗವಹಿಸಲಿದ್ದಾರೆ.

ಡಿಸೆಂಬರ್ 15ರಂದು ಕರ್ನಾಟಕದ ತಲಕಾವೇರಿಯಿಂದ ರಾಜ್ಯ ಪ್ರವೇಶಿಸುವ ದಕ್ಷಿಣದ ತಂಡ ಡಿ. 27ರಂದು ಚಿಕ್ಕಮಗಳೂರು ಜಿಲ್ಲೆ ತಲುಪಿ, ಸಂಸೆ, ಗಂಗಾಮೂಲ, ಕಳಸ, ಮಾಗುಂಡಿ, ಬಾಳೆಹೊನ್ನೂರು, ಬಸರಿಕಟ್ಟೆ, ಬಿಳಾಲುಕೊಪ್ಪ ಶೃಂಗೇರಿ ಮೂಲಕ 1988ರ ಜನವರಿ 1ರಂದು ಶಿವಮೊಗ್ಗ ಜಿಲ್ಲೆಗೆ ತೆರಳುವುದು.

ಪಶ್ಚಿಮ ಘಟ್ಟದ ಪರಿಸರ ಸಮತೋಲನ ಹಾಗೂ ಅದರ ಸಂರಕ್ಷಣೆಯ ಮಹತ್ವಗಳ ಬಗ್ಗೆ ಜನರಲ್ಲಿ ಜಾಗೃತಿ ಉಂಟುಮಾಡಿ ಸಂಘಟಿತ ಪ್ರಯತ್ನಗಳಿಗೆ ಅನುವು ಮಾಡಿಕೊಡುವುದೇ ಈ ಪಾದಯಾತ್ರೆಯ ಮುಖ್ಯ ಉದ್ದೇಶ. ಪಾದಯಾತ್ರಿಗಳಿಗೆ ಪಶ್ಚಿಮ ಘಟ್ಟದ ಪರಿಸರ ಹಾಗೂ ಅಲ್ಲಿ ನಡೆದಿರುವ ವಿನಾಶಾತ್ಮಕ ಕಾರ್ಯಕ್ರಮಗಳ ಬಗ್ಗೆ ಹೆಚ್ಚು ಅರಿತುಕೊಳ್ಳಲು ಈ ಕಾರ್ಯಕ್ರಮ ಉಪಯುಕ್ತವಾಗಲಿದೆ.

(3ನೇ ಪುಟಕ್ಕೆ)

## ಜಿಲ್ಲೆಯಲ್ಲಿ ಜಾಥಾದ ಮಾರ್ಗ ಮತ್ತು ಕಾರ್ಯಕ್ರಮಗಳು

ಪಶ್ಚಿಮ ಘಟ್ಟಗಳ ದಕ್ಷಿಣ ತುದಿಯಾದ ಕನ್ಯಾಕುಮಾರಿಯಿಂದ ಹೊರಟಿರುವ 'ಪಶ್ಚಿಮ ಘಟ್ಟ ಉಳಿಸಿ' ಪಾದಯಾತ್ರಾ ತಂಡವು ನಮ್ಮ ಜಿಲ್ಲೆಯಲ್ಲಿ ಸಂಚರಿಸುವ ಮಾರ್ಗ ಹಾಗೂ ಕಾರ್ಯಕ್ರಮಗಳು ಈ ಕೆಳಕಂಡಂತಿವೆ :

1987 ಡಿಸೆಂಬರ್ 27 : ಸಂಸೆ – ತಂಗುವುದು;

ಡಿ. 28 : ಸಂಸೆಯಿಂದ ಬೆಳಿಗ್ಗೆ ಹೊರಟು ಕುದುರೆಮುಖ, ಗಂಗಾಮೂಲ ಹಾಗೂ ವಾಪಸು ಕಳಸ (ತಂಗುವುದು) (ಮಧ್ಯಾಹ್ನ ಕಾಳಗದ್ದೆ);

ಡಿ. 29 : ಕಳಸ, ಹಳುವಳ್ಳಿ, ಬಾಳೆಹೊಳೆ (ಮಧ್ಯಾಹ್ನ), ಮಾಗುಂಡಿ, ಬಾಳೆಹೊನ್ನೂರು (ತಂಗುವುದು);

ಡಿ. 30 : ಬಾಳೆಹೊನ್ನೂರು, ಹೇರೂರು, ಬಸರಿಕಟ್ಟೆ (ಮಧ್ಯಾಹ್ನ), ಬಿಳಾಲ್ ಕೊಪ್ಪ (ತಂಗುವಿಕೆ);

ಡಿ. 31 : ಬಿಳಾಲ್‌ಕೊಪ್ಪ, ಹೆಗ್ಗಾರು ಕೊಡಿಗೆ, ಕುಂಚೆಬೈಲು (ಮಧ್ಯಾಹ್ನ), ಶೃಂಗೇರಿ (ತಂಗುವಿಕೆ)

1988 ಜನವರಿ 1 : ಶೃಂಗೇರಿ, ಬಿದರಗೋಡು, ಬೇಗಾರು, ಮುಂದೆ ಶಿವಮೊಗ್ಗ ಜಿಲ್ಲೆಗೆ ಪ್ರಯಾಣ.

ಇಷ್ಟೊಂದು ದೀರ್ಘ ಪ್ರದೇಶವನ್ನು ನಿಯಮಿತ ಕಾಲದಲ್ಲಿ ಕಾಲ್ನಡಿಗೆಯಲ್ಲಿ ನಡೆಯುವುದು ಸಾಧ್ಯವಿಲ್ಲದಿರುವುದರಿಂದ ಅಲ್ಲಲ್ಲಿ ಸಂಚಾರಕ್ಕೆ ವಾಹನಗಳನ್ನು ಬಳಸಲಾಗುವುದು.

ಪಶ್ಚಿಮ ಘಟ್ಟ ಉಳಿಸಿ ಜಾಥಾ ಜಿಲ್ಲೆಗೆ ಬಂದಾಗ ಭವ್ಯವಾಗಿ ಸ್ವಾಗತಿಸಲು ಜಿಲ್ಲಾ ಪರಿಷತ್ ಅಧ್ಯಕ್ಷ ಕೆ. ಎಂ ಕೃಷ್ಣಮೂರ್ತಿ ಗೌರವಾಧ್ಯಕ್ಷರೂ ಬಿ. ಎಲ್. ರಾಮ್‌ದಾಸ್ ಕಾರ್ಯಾಧ್ಯಕ್ಷರೂ ಆಗಿರುವ ಸಮಿತಿ ರಚಿಸಲಾಗಿದೆ.

ಜಾಥಾ ಸಮಯದಲ್ಲಿ ಸ್ವಾಗತಿಸಲು, ವಿವಿಧ ಕಾರ್ಯಕ್ರಮಗಳನ್ನು ರೂಪಿಸಲು ಗ್ರಾಮ ಮಟ್ಟದ ಸಮಿತಿಗಳನ್ನು ಈಗಾಗಲೇ ರಚಿಸಲಾಗಿದೆ. ಮುಖ್ಯ ಜಾಥಾದೊಡನೆ ಅಲ್ಲಲ್ಲಿ ಗ್ರಾಮೀಣ ಪ್ರದೇಶಗಳಿಂದ ಬರುವ ಉಪ ಜಾಥಾಗಳು ಸೇರಿಕೊಳ್ಳುವುವು. ಜಾಥಾ ಸಂದರ್ಭದಲ್ಲಿ ಪರಿಸರ ರಕ್ಷಣೆಯ ಜಾಗೃತಿಗಾಗಿ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. "ನಿಸರ್ಗ ಸಂಧಾನ" ಎಂಬ ಯಕ್ಷಗಾನ ಹಾಗೂ ಬೀದಿನಾಟಕಗಳ ಮೂಲಕ ಪರಿಸರ ಜಾಗೃತಿಯ ಸಂದೇಶ ನೀಡಲಾಗುವುದು.

ಜಾಥಾದ ಸಂದರ್ಭದಲ್ಲಿ ಸಕ್ರಿಯವಾಗಿ ಪಾಲುಗೊಳ್ಳಲು ಅನೇಕ ಸಂಘ ಸಂಸ್ಥೆಗಳು ಈಗಾಗಲೇ ಮುಂದೆ ಬಂದಿವೆ.

ಈ ಸಂದರ್ಭದಲ್ಲಿ ಭದ್ರಾ ಮೇಲ್ದಂಡೆ ಯೋಜನೆಯ ಅನುಷ್ಠಾನದಿಂದಾಗುವ ಅನಾಹುತಗಳ ಬಗ್ಗೆ ಹೆಚ್ಚಿನ ಜಾಗೃತಿ ಮೂಡಿಸಲಾಗುವುದು. ಡಿಸೆಂಬರ್ 29ರಂದು ಮಾಗುಂಡಿಯಲ್ಲಿ ಸಾಂಕೇತಿಕವಾಗಿ ಒಂದು ದಿನದ ಉಪವಾಸ ಸತ್ಯಾಗ್ರಹ ಹೂಡಲಾಗುವುದು. ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿ ಸದಸ್ಯ ಎಂ. ಐ ಶ್ರೀನಿವಾಸ ಮೂರ್ತಿ ಈ ಸತ್ಯಾಗ್ರಹದ ನೇತೃತ್ವ ವಹಿಸುವರು.

ಅರಣ್ಯ ಇಲಾಖೆಯ ಸಾಮಾಜಿಕ ಅರಣ್ಯ ವಿಭಾಗವೂ ಕೂಡಾ ಈ ಸಂದರ್ಭದಲ್ಲಿ ವೃಕ್ಷ, ವೃತ್ತ, ಪವಿತ್ರವನ, ಸಾಲುಮರ ನೆಡುವಿಕೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದೆಂದು ಉಪ ಅರಣ್ಯ ಸಂರಕ್ಷಣಾಧಿಕಾರಿ ಗೋಪಾಲ ಪೂಜಾರಿ ತಿಳಿಸಿದ್ದಾರೆ.

ಈ ಜಾಥಾ ಜಿಲ್ಲೆಗೆ ಬರುವ ಸಂದರ್ಭದಲ್ಲಿ ಜಿಲ್ಲಾದ್ಯಂತ ಶಾಲಾ ಕಾಲೇಜುಗಳು ಹಾಗೂ ಸಂಘ ಸಂಸ್ಥೆಗಳಲ್ಲಿ ಪರಿಸರ ಜಾಗೃತಿ ಕಾರ್ಯಕ್ರಮಗಳನ್ನು ರೂಪಿಸಬೇಕೆಂದೂ, ಜಾಥಾ ಸ್ವಾಗತಿಸಲು ಹಾಗೂ ಜಾಥಾದಲ್ಲಿ ಮಹಿಳೆಯರು, ಶಾಲಾ ಮಕ್ಕಳೂ ಸೇರಿದಂತೆ ಹೆಚ್ಚು ಹೆಚ್ಚು ಜನರು ಭಾಗವಹಿಸಬೇಕೆಂದೂ ಕೋರಲಾಗಿದೆ

**ಪರಿಸರ ನಾಶದ ಕುರಿತು ದಾಖಲಾತಿಗಳನ್ನು ಮಾಡಲು ಜಾಥಾದೊಡನೆ ವಿಶೇಷ ವಿಭಾಗವೊಂದು ಕೆಲಸ ಮಾಡಲಿದ್ದು, ಪರಿಸರ ನಾಶದ ವಿಶೇಷ ಸಂದರ್ಭಗಳಿದ್ದರೆ ಅಂಥ ಪ್ರಕರಣಗಳ ಬಗ್ಗೆ ಬಿ. ಎಸ್. ಸುರೇಶ್, ಓರಿಯೆಂಟಲ್ ಇನ್ಶೂರೆನ್ಸ್ ಅಧಿಕಾರಿಗಳು, ಕೊಪ್ಪ, ಇವರ ತಿಳುವಳಿಕೆಗೆ ತರಲು ಕೋರಲಾಗಿದೆ.**

ಶಾಸಕರ, ಸ್ಥಳೀಯ ಮುಖಂಡರ ಮಾತುಗಳನ್ನೆಲ್ಲ ಮೀರಿದ 'ತುಘಲಕ್ ದರ್ಬಾರ್':

# ದಲಿತರ ಮೇಲೆ ನ. ರಾ. ಪುರ ತಹಸೀಲ್ದಾರರ ಭಾರೀ 'ಕಾರ್ಯಾಚರಣೆ'

(ವರದಿ : ಸಿರಿಮನೆ ನಾಗರಾಜ್ ಮತ್ತು ಕೃಷ್ಣ ಭಂಡಾರಿ)

**ಬಾಳೆಹೊನ್ನೂರಿಗೆ ಸಮೀಪದ ಬನ್ನೂರಿನ ಸ. ನಂ. 14ರ ರೆವಿನ್ಯೂ ಭೂಮಿಯಲ್ಲಿ (ಗೋಮಾಳ) ಗುಡಿಸಲು ಕಟ್ಟಿಕೊಂಡು ತಲಾ ಒಂದೂವರೆ-ಎರಡು ಎಕರೆ ಭೂಮಿಗೆ ದರ್ಖಾಸ್ತು ಕೊಟ್ಟು ತಮ್ಮದೂ 'ಒಂದು ತುಂಡು ಭೂಮಿ' ಹೊಂದಲು ಹವಣಿಸಿದ್ದ ಚೋಮನ ಸಂತತಿಯ 7 ಕುಟುಂಬಗಳ ಮೇಲೆ ನ. ರಾ. ಪುರ ತಹಸೀಲ್ದಾರ್ ಮಲ್ಲೇಶ್ ಅವರು ಡಿ. 1ರಂದು ಹಠಾತ್ ದಾಳಿ ಮಾಡಿ ಅವರನ್ನೆಲ್ಲ 'ಕಾಡು ಪಾಲು' ಮಾಡಿದ್ದಾರೆ.**

ಬಡವರಿಗೆಲ್ಲ ಮನೆ-ಭೂಮಿ-ಸಕಲ ಸೌಕರ್ಯಗಳನ್ನು ಕೊಡುತ್ತೇವೆಂದು ಸರ್ಕಾರ ಹೇಳಿಕೊಳ್ಳುತ್ತಿರುವ ಸಮಯದಲ್ಲಿ, ಅದರ ಮೂಗಿನಡಿಯಲ್ಲೇ ಈ ದಬ್ಬಾಳಿಕೆ ನಡೆದಿದೆ. ಸರ್ಕಾರ ಕೊಡುವುದಿರಲಿ, ತಾನೇ ಏನೋ ಒಂದು ನೆಲೆ ಕಂಡುಕೊಳ್ಳಲು ಯತ್ನಿಸಿದ ಈ ನಿರ್ಗತಿಕರನ್ನು ಅದೇ ಸರ್ಕಾರದ ಅಧಿಕಾರ ಯಂತ್ರವೇ 'ಬುಲ್‌ಡೋಜರ್' ಮಾಡಿದೆ.

### ಮುನ್ಸೂಚನೆಯಿಲ್ಲದೆ

ಅಕ್ರಮ ಸ್ವಾಧೀನವನ್ನು ಕೂಡ ಖುಲ್ಲಾ ಮಾಡಿಸಬೇಕಾದರೆ ಅತ್ಯಗತ್ಯವಾಗಿ ನೀಡಬೇಕಾದ ನೋಟೀಸಿರಲಿ, ಯಾವ ಮುನ್ಸೂಚನೆ ಕೂಡ ಕೊಡದೆ ಎರಡು ಪೋಲೀಸ್ ಜೀಪ್, ಒಂದು ವ್ಯಾನ್ ರಿಸರ್ವ್ ಪೋಲೀಸ್, ಅರಣ್ಯ ಇಲಾಖೆಯ 2 ಲಾರಿ, ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್, ಇಬ್ಬರು ಮಹಿಳಾ ಪೋಲೀಸರು- ಮುಂತಾದ ಸಕಲ ಬಲದ ಸಿದ್ಧತೆಯೊಡನೆ ತಹಸೀಲ್ದಾರರು "ಸರ್ಕಾರೀ ಭೂಮಿ ಉಳಿಸುವ" ಈ ಕಾರ್ಯಾಚರಣೆಯನ್ನು ಬಹಳ ಜರ್ಬಿನಿಂದಲೇ ನೆರವೇರಿಸಿದ್ದಾರೆ.

ಈ ಮನೆಗಳನ್ನು ಕಟ್ಟಿದ್ದ ಸಾಮಗ್ರಿ, ತಂತಿ ಬೇಲಿಯ ತಂತಿ ಮತ್ತು ಕಂಬಗಳನ್ನೂ ತಹಸೀಲ್ದಾರರು ಲಾರಿಯಲ್ಲಿ ತುಂಬಿಸಿಕೊಂಡು ಹೋಗಿದ್ದಾರೆನ್ನಲಾಗಿದೆ.

ಈ ಭೂಮಿ ಮಂಜೂರು ಮಾಡಿಸಿಕೊಡಬೇಕೆಂಬ ಮನವಿಯ ಜೊತೆಗೆ, ತಮ್ಮ ಈ ಪ್ರಯತ್ನಕ್ಕೆ ಸ್ಥಳೀಯ ಭಾರೀ ಭೂಮಾಲೀಕರೊಬ್ಬರ ಕಿರುಕುಳ, ಅದಕ್ಕೆ ಸ್ಥಳೀಯ ಗ್ರಾಮಲೆಕ್ಕಿಗನ ಕುಮ್ಮಕ್ಕು, ಇವನ್ನೆಲ್ಲ ಈ ಬಡವರು ಶಾಸಕ ಗೋವಿಂದ ಗೌಡರಿಗೆ ತಿಳಿಸಿ, ಅವರು ತಹಸೀಲ್ದಾರರಿಗೆ ಈ ಬಡವರಿಗೆ ರಕ್ಷಣೆ ಕೊಟ್ಟು, ಕಾನೂನಿನ ರೀತ್ಯಾ ಅವರಿಗೆಲ್ಲ ಜಮೀನು ದೊರಕಿಸಿಕೊಡಬೇಕೆಂದು ಸೂಚನೆ ನೀಡಿದ್ದಾಗ್ಯೂ ಸಹ ಅವರು ಊರಲ್ಲಿಲ್ಲದ ಸಮಯವನ್ನೇ ಕಾದು ಈ 'ಸರ್ಕಾರಿ ಒಕ್ಕಲೆಬ್ಬಿಸುವಿಕೆ' ನಿರಾತಂಕವಾಗಿ ನಡೆದಿದೆ.

### "ಮೇಲಿನಿಂದ ಆಜ್ಞೆ"

ಇದು ನಡೆದಾಗ ಶಾಸಕರು ಹಾಗೂ ಇಂಥ ಕಾರ್ಯಾಚರಣೆಗಳನ್ನ ಬಹಳ ಪ್ರಬಲವಾಗಿ ವಿರೋಧಿಸುವವರೆನ್ನಲಾದ ಜನತಾ ಮುಖಂಡ ಕೊಳಲೆ ರುದ್ರಪ್ಪ ಇಬ್ಬರೂ ಊರಲ್ಲಿರಲಿಲ್ಲ. ಕಡೇ ಪಕ್ಷ ಶಾಸಕರು ಊರಿಗೆ ಹಿಂದಿರುಗುವವರೆಗಾದರೂ ಕಾರ್ಯಾಚರಣೆ ನಡೆಸದಂತೆ ಜಿ. ಪ. ಸದಸ್ಯ ವಿಜಗ ಚಂದ್ರಶೇಖರ್, ಬನ್ನೂರು ಮತ್ತು ಬಾಳೆಹೊನ್ನೂರುಗಳ ಮಂಡಲ ಪ್ರಧಾನರುಗಳು ಮುಂತಾಗಿ ಯಾರೆಲ್ಲ ಹೇಳಿದರೂ, "ಸಾಧ್ಯವಿಲ್ಲ. ಇದು ಮೇಲಧಿಕಾರಿಗಳ ಆಜ್ಞೆ" ಎಂಬ ಉತ್ತರವನ್ನು ತಹಸೀಲ್ದಾರ್ ನೀಡಿದರೆನ್ನಲಾಗಿದೆ.

ಅನಂತರ ಕಳೆದವಾರ ನಡೆದ ತಾಲ್ಲೂಕಿನ 20 ಅಂಶದ ಸಭೆಯ ವೇಳೆ ಈ ಹರಿಜನರು ಶಾಸಕರಿಗೆ ಈ ಬಗ್ಗೆ ತಿಳಿಸಿದಾಗ ಇದನ್ನು ಬಹಳ ತೀವ್ರವಾಗಿ ಆಕ್ಷೇಪಿಸಿದ ಅವರು, ಅವರೆಲ್ಲರಿಗೆ ಅಲ್ಲೇ ಮನೆ ಕಟ್ಟಿಕೊಳ್ಳಲು ಹೇಳಿದ್ದಾರೆಂದು ತಿಳಿದು ಬಂದಿದೆ.

ಈ ದೌರ್ಜನ್ಯದ ಬಗ್ಗೆ ವಾಸ್ತವ ಸಂಗತಿಗಳನ್ನ ತಿಳಿಯಲು ನಾವು ಸ್ಥಳಕ್ಕೆ ಭೇಟಿ ನೀಡಿದಾಗ ಕಾಡಿನ ಮರಗಳ ಅಡಿಯಲ್ಲೇ, ಧರಣಿ ಕೂತವರಂತೆ 10-15 ಜನ ದಲಿತರು ಚಪ್ಪರ ಹಾಕಿಕೊಂಡು ಅಲ್ಲೇ ಅನ್ನ ಬೇಯಿಸುತ್ತಿದ್ದರು. ಅಕ್ಕ ಪಕ್ಕದ ಕೆಲವು ಸಾಮಾನ್ಯ ರೈತರ ಮತ್ತು ಬನ್ನೂರಿನ ಕೆಲವು ಮಂದಿ ಯುವಕರ ನೆರವಿನೊಂದಿಗೆ ದಿನಕ್ಕೊಂದು ಹೊತ್ತು ಊಟ ಮಾಡಿಕೊಂಡು, ತಮ್ಮ ಮನೆಗಳನ್ನು ಪುನಃ ನಿರ್ಮಾಣ ಮಾಡುತ್ತಿರುವುದಾಗಿ ತಿಳಿಸಿದರು.

### ವಿವಾದದ ಮೂಲ

ಈ ಸ. ನಂ. 14ರಲ್ಲಿ ಒಟ್ಟು 745 ಎಕರೆ ಭೂಮಿ ಇದ್ದು ಅದರಲ್ಲಿ ಸುಮಾರು 200-220 ಎಕರೆಯಷ್ಟು ಮಾತ್ರ ನೇರವಾಗಿ ಮತ್ತು ಟಿ. ಟಿ. ರಿಕಾರ್ಡ್ ಮೂಲಕ ಮಂಜೂರಾಗಿರುವಂಥದು. ಮಿಕ್ಕಿದ್ದೆಲ್ಲ ಅಲ್ಲಲ್ಲಿನ ಜಮೀನುಳ್ಳವರಿಂದ ಒತ್ತುವರಿಯಾಗಿ, ಈಗ ಈ ದಲಿತರು ದರ್ಖಾಸ್ತು ಕೇಳಿರುವ ಭಾಗದಲ್ಲಿ ಸುಮಾರು 26-28 ಎಕರೆಯಷ್ಟು ಭೂಮಿ ಮಾತ್ರ ಉಳಿದಿದೆ.

ಈ ಜಾಗದಿಂದ ಸುಮಾರು 1 ಕಿ. ಮೀ. ದೂರದವರೆಗೆ ತಮ್ಮ ಜಮೀನು ಹೊಂದಿರುವ ಸ್ಥಳೀಯ ಭಾರೀ ಜಮೀನ್ದಾರರಾದ ಮಾಜಿ ಪಟೇಲ ಮಂಜಪ್ಪಗೌಡರು ಈ ಜಾಗದ ಮೇಲೂ ಕಣ್ಣು ಹಾಕಿರುವುದೇ ತಮ್ಮನ್ನು ಇಲ್ಲಿಂದ ಒಕ್ಕಲೆಬ್ಬಿಸಲು ಕಾರಣ ಎಂದು ಇವರು ಹೇಳುತ್ತಾರೆ.

ಇಲ್ಲಿ ಸುಮಾರು 20 ಜನ ಹರಿಜನರು ಮತ್ತಿತರ ದಲಿತ ವರ್ಗದವರು ಭೂಮಿ ಕೇಳಿ 5-6 ವರ್ಷದಿಂದ ದರ್ಖಾಸ್ತು ಅರ್ಜಿ ಕೊಡುತ್ತಿದ್ದೇವೆಂದೂ, ಅದರಲ್ಲಿ ಕೆಲವರು 6 ತಿಂಗಳ ಹಿಂದೆ ಇಲ್ಲಿ ಮನೆ ಎಂಬ ಗುಡಿಸಲು ಕಟ್ಟಿ, ಕಾಫಿ ಗಿಡ ಹಾಕಿಕೊಂಡಿದ್ದಾಗಿಯೂ ಹೇಳುತ್ತಾರೆ 4 ತಿಂಗಳ ಹಿಂದೆ ಪಟೇಲರು ತಮ್ಮ ಟ್ರಾಕ್ಟರ್ ಕಳಿಸಿ ತಮ್ಮ ಒಡ್ಡಿನ ಬೇಲಿಯನ್ನು ನೆಲಸಮ ಮಾಡಿದರು. ಪುನಃ ಬನ್ನೂರಿನ ನಾರಾಯಣ ಗೌಡ, ರವೀಶ್, ರಾಜಪ್ಪಗೌಡ ಮುಂತಾದವರ ನೆರವಿನಿಂದ ತಂತಿ ಬೇಲಿ ಮಾಡಿಕೊಂಡಾಗ ತಹಸೀಲ್ದಾರರ ಮೂಲಕ ಈ ರೀತಿ ಮಾಡಿಸಿದ್ದಾರೆ ಎನ್ನುತ್ತಾರೆ. ಹೀಗೆ ಮನೆ ಕಟ್ಟಿ ಕಳೆದು ಕೊಂಡಿರುವವರು ಚಂದಪ್ಪ, ಮಿಜುಕ್ರ, ಕೂಕ್ರ, ಶೀನ, ಬೀರ, ಶೀಲ (ಗಂಡಸು) ಮತ್ತು ಬೊಮ್ಮ.

### ಪಟೇಲರ ಪಾಠಾಂತರ (version)

ಪಟೇಲರ ಕಡೆಯ ಹೇಳಿಕೆಯಂತೆ ಈ ವಿವಾದಕ್ಕೂ ಅವರಿಗೂ ಸಂಬಂಧವಿಲ್ಲ. ಈ ಹರಿಜನರು ಸ್ಥಳೀಯರಲ್ಲ, ಸ್ವಲ್ಪ ದೂರದ ಕೂಡಿಗೆಯವರು. ಅವರಿಗೆ ಅಲ್ಲಿ ಜನತಾ ಮನೆ, ಸೈಟು ಇವೆ. ಸ್ಥಳೀಯ ಹರಿಜನರು ಹಿಂದೆ ಈ ಜಾಗಕ್ಕೆ ದರ್ಖಾಸ್ತು ಕೊಟ್ಟು ಮನೆ ಕಟ್ಟಿದ್ದರು; ಆದರೆ ಕಾಡಾನೆ ಹಾವಳಿಗೆ ಹೆದರಿ ಮೊದಲಿನ ಮನೆಗಳಿಗೇ ಹೋದರು. ಅದೇ ಜಾಗಗಳಲ್ಲಿ ಇವರು ಈಗ ಮನೆ ಕಟ್ಟಿದ್ದಾರೆ. ಅವರ ದರ್ಖಾಸ್ತು ಅರ್ಜಿಗಳು ಹಾಗೇ ಇವೆ.

ಇದು ಗೋಮಾಳದ ಭೂಮಿ ಕೂಡ. ಈ ಕಾರಣಗಳಿಂದ ಅವರುಗಳು ಮತ್ತು ಗ್ರಾಮಸ್ಥರು ಇವರಿಗೆ ತಕರಾರು ಮಾಡುತ್ತಿದ್ದಾರೆ.

### ಸತ್ಯದೂರ

ಆದರೆ ಇದನ್ನೆಲ್ಲ ಈ ದಲಿತರು ನಿರಾಕರಿಸುತ್ತಾರೆ. ತಮಗ್ಯಾರಿಗೂ ಸರ್ಕಾರದಿಂದ ಒಂದು ತುಂಡು ಜಾಗವೂ ಸಿಕ್ಕಿಲ್ಲ. ಈ ಸರ್ವೆ ನಂಬರಿನಲ್ಲಿ ಈ ಹಿಂದೆ ಹರಿಜನರಿಗೆ ದರ್ಖಾಸ್ತು ಮಂಜೂರಾಗಿದ್ದ ಭೂಮಿಗೆ ಪಟೇಲರು ಬೇಲಿ ಹಾಕಿ, ತಮ್ಮ ತೋಟದ ಕೂಲಿ ಲೈನ್ ಕಟ್ಟಲು ತಳಪಾಯ ಹಾಕಿದ್ದಾರೆ. ಇನ್ನೊಂದೆಡೆ ಕಾಫಿ ಗಿಡ ಹಾಕಿದ್ದಾರೆ ಊರಿನ ಹರಿಜನರಿಗೆ ಮಂಜೂರಾದ ಭಾಗ್ಯ ಜ್ಯೋತಿ ವಿದ್ಯುದ್ದೀಪವನ್ನು ತಮ್ಮ ಸ್ವಂತದ ಕೂಲಿ ಲೈನಿಗೆ ಹಾಕಿಸಿಕೊಂಡಿದ್ದಾರೆ.

ಈಗ ಆ ಹರಿಜನರಿಗೆ ಮಂಜೂರಾದ ಭೂಮಿ ಇದೆಂದು ತೋರಿಸಿ, ಬೇಲಿ ಹಾಕಿ ಕ್ರಮೇಣ ಅದನ್ನೂ ತಮ್ಮ ವಶ ಮಾಡಿಕೊಳ್ಳಬೇಕೆಂಬುದು ಅವರ ಉದ್ದೇಶ. ಹರಿಜನರಾದ ನಮ್ಮ ಮೇಲೆ ಇಲ್ಲಿನ ಹರಿಜನರನ್ನು ಎತ್ತಿ ಕಟ್ಟಿ ಈ ಜಾಗ ನಮಗೆ ಸಿಕ್ಕದಂತೆ ಮಾಡುವ ಅವರ ಸಂಚು ಇದು ಎನ್ನುತ್ತಾರೆ

### ಬಾಜುದಾರರ ಬೆಂಬಲ

ಸುತ್ತ ಮುತ್ತ ಈ ಜಮೀನಿನ ಬಾಜುದಾರರಾದ ಲಕ್ಷ್ಮಣ ಗೌಡ, ಮಂಜುನಾಥ ಗೌಡ, ಚಂದ್ರೇಗೌಡ ಮುಂತಾದವರು ನಮಗೆ ನೆರವನ್ನು ಕೊಟ್ಟು ಜಮೀನು ಮಾಡಿಕೊಳ್ಳಿ ಎಂದು ಪ್ರೋತ್ಸಾಹವನ್ನೇ ಕೊಡುತ್ತಿದ್ದಾರೆ. ಅವರ್ಯಾರೂ ತಕರಾರು ಮಾಡಿಲ್ಲ. ಅಡ್ಡಿ ಮಾಡಿಸುತ್ತಿರುವವರು ಪಟೇಲರು ಮತ್ತು ಕುಂಬ್ರಿಮನೆ ಬಿ. ಕೆ. ಮಂಜಪ್ಪ ಗೌಡರು- ಇವರಿಬ್ಬರೇ. ಮಕ್ಕಳು, ಸೊಸೆಯಂದಿರು-ಹೀಗೆ ಎಲ್ಲರ ಹೆಸರಲ್ಲೂ ಗ್ರಾಮದ ಎಲ್ಲಾ ಕಡೆ ಜಮೀನು, ಆಸ್ತಿ ಪಾಸ್ತಿಗಳನ್ನು ಮಾಡಿಕೊಂಡಿರುವ ಇವರಿಬ್ಬರಿಗೆ ಈ ಭೂಮಿಯ ಮೇಲೂ ಆಸೆ ಎಂದು ಆಪಾದಿಸುತ್ತಾರೆ.

ಸ್ಥಳೀಯ ಕೆಲ ಹರಿಜನರು ತಮಗೆ ಭೂಮಿ ಮಂಜೂರಾಗಿರುವುದು ಹೌದೆಂದರೂ ಜಾಗ ಯಾವುದು ಮುಂತಾಗಿ ಕೇಳಿದರೆ 'ಅಯ್ಯ'ನನ್ನೇ (ಪಟೇಲರನ್ನು) ಕೇಳಿ, ಹೇಳ್ತಾರೆ- ಎನ್ನುತ್ತಾರೆ!

ಹರಿಜನರ ಭೂಮಿಯಲ್ಲಿ ತಾವು ಗಿಡ ಹಾಕಿಲ್ಲ ಅಥವಾ ನೆಲಗಟ್ಟು ಮಾಡಿಲ್ಲ ಎನ್ನುವ ಪಟೇಲರ ಮಗ ಶಿವಣ್ಣ, ಮರ ತೆಗೆಯದ ಆ ಭೂಮಿಯಲ್ಲಿ ಜಾನುವಾರ ಮೇಯಿಸುತ್ತಿದ್ದೇವೆ. ಊರಿನ ಬೇರೆಯವರೂ ಮೇಯಿಸ್ತಾರೆ ಎನ್ನುತ್ತಾರೆ.

### ತೆರವು ಮಾಡಲು ಒಪ್ಪಿಗೆ

ಆದರೆ ಹರಿಜನರಿಗಾದ ಆ ಭೂಮಿಯನ್ನು ಬಿಟ್ಟುಕೊಡಲು ತಹಸೀಲ್ದಾರರ ಇತ್ತೀಚಿನ ಗ್ರಾಮಸಭೆಯೊಂದರಲ್ಲಿ ಪಟೇಲರೇ ಒಪ್ಪಿಕೊಂಡಿದ್ದನ್ನು ತಹಸೀಲ್ದಾರ್ ಮಲ್ಲೇಶ್ ಅವರೇ 'ಮುಂಜಾವು'ಗೆ ತಿಳಿಸಿದರು. ಸಭೆಯಲ್ಲಿ ಹರಿಜನರು, ತಮ್ಮ ಭೂಮಿಗೆ ಪಟೇಲರು ಬೇಲಿ ಹಾಕಿದ್ದಾರೆಂದೂ, ತೆರವು ಮಾಡಿಸಿಕೊಡಬೇಕೆಂದೂ ಹೇಳಿದರಂತೆ. ಇನ್ನು ಕೆಲ ಯುವಕರು, ನೆಲಗಟ್ಟು, ಗಿಡ ಹಾಕಿಸಿದ ಬಗೆಗೆಲ್ಲ ಕೇಳಿದರಂತೆ. ಆಗ ಮಂಡಲ ಪಂಚಾಯ್ತಿ ಸದಸ್ಯರೊಬ್ಬರು, ಈ ಹರಿಜನರಿಗೆ ಬೇರೆ ಭೂಮಿಯನ್ನಾದರೂ ತೋರಿಸಿ, ಈ ವಿವಾದವನ್ನೊಮ್ಮೆ ಬಗೆ ಹರಿಸಲು ತಹಸೀಲ್ದಾರರನ್ನು ಕೋರಿದರಂತೆ. ಆಗ ಅವರು, ಹರಿಜನರಿಗೆ ಮಂಜೂರಾದುದನ್ನು ಯಾವ ಕಾರಣಕ್ಕೂ ಬದಲಿಸಿ ಬೇರೆಯವರಿಗೆ ಕೊಡುವಂತಿಲ್ಲ ಎಂದಾಗ, ಪಟೇಲರೆದ್ದು, "ಸ್ವಾಮಿ, ನನ್ನದೇನಿಲ್ಲ. ಯಾವಾಗ ಬೇಕಾದರೂ ಆ ಜಾಗ ಖುಲ್ಲಾ ಮಾಡಿಸಿ ಕೊಡುತ್ತೇನೆ" ಎಂದು ಒಪ್ಪಿಕೊಂಡರಂತೆ.

### ದಾಖಲೆಗಳು

ಶಿವಣ್ಣ ಇವನ್ನೂ ಅಲ್ಲಗಳೆಯುತ್ತಾರೆ. ಬೇಕಾದರೆ ಬನ್ನಿ. ಅಲ್ಲಿ ಯಾವ ನೆಲಗಟ್ಟೂ

(4ನೇ ಪುಟಕ್ಕೆ)

### "ಪಶ್ಚಿಮ ಘಟ್ಟ ಉಳಿಸಿ" ಪಾದಯಾತ್ರೆ

(2ನೇ ಪುಟದಿಂದ)

"ಪಶ್ಚಿಮ ಘಟ್ಟ ಉಳಿಸಿ" ಅಭಿಯಾನದಿಂದ ಉಂಟಾಗುವ ಜಾಗೃತಿ ಹಾಗೂ ಪ್ರೇರಣೆಗಳು ಸರಿಯಾದ ದಿಕ್ಕಿನಲ್ಲಿ ಪಡೆದು ಜನರ ಗುಂಪುಗಳು ಬೇರೆ ಬೇರೆ ಕಡೆ ಕಾರ್ಯೋನ್ಮುಖವಾಗುವಂತೆ ಅನುಸ್ಮರಣೆ ಮಾಡುವ ಯೋಜನೆಯೂ ಇದೆ. ಸರ್ಕಾರಿ ಇಲಾಖೆಗಳು, ಜನತೆ, ಸ್ವಯಂ ಸೇವಾ ಸಂಸ್ಥೆಗಳು, ಶಿಕ್ಷಣ ಸಂಸ್ಥೆಗಳು ಕೈ ಕೈ ಕೂಡಿಸಿ ಅರಣ್ಯಾಭಿವೃದ್ಧಿ, ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ಕಾರ್ಯದಲ್ಲಿ ಒಂದಾಗಬೇಕು. ಈ ದಿಶೆಯಲ್ಲಿ "ಪಶ್ಚಿಮ ಘಟ್ಟ ಉಳಿಸಿ" ಅಭಿಯಾನ ಒಂದು ಮಹತ್ವದ ಹೆಜ್ಜೆಯಾಗಲಿ ಎಂಬುದೇ ನಮ್ಮೆಲ್ಲರ ಹಾರೈಕೆ.

# ದಲಿತರ ಮೇಲೆ 'ಭಾರೀ' ಕಾರ್ಯಾಚರಣೆ

(3ನೇ ಪುಟದಿಂದ)

ಇಲ್ಲ. ಎಲ್ಲಾ ದಾಖಲೆಗಳನ್ನೂ ಕ್ರಮವಾಗಿ ಇಟ್ಟುಕೊಂಡಿದ್ದೇವೆ. ಯಾರ ಭೂಮಿಯನ್ನೂ ಒಳಗೆ ಹಾಕಿಲ್ಲ. ಈ ವಿವಾದಕ್ಕೂ ನಮಗೂ ಸಂಬಂಧವೇ ಇಲ್ಲ. ಅಲ್ಲಿ ಕಾಫಿ ತೋಟ ಮಾಡಿರುವವರೊಬ್ಬರು, ಈ ಹರಿಜನರನ್ನು ಎತ್ತಿಕಟ್ಟಿ ಜಮೀನು ದರ್ಖಾಸ್ತು ಮಾಡಿಸಿ, ಕ್ರಮೇಣ ತಮ್ಮದಾಗಿಸಿಕೊಳ್ಳಲು ಇದನ್ನೆಲ್ಲ ಮಾಡಿಸುತ್ತಿದ್ದಾರೆ—ಎನ್ನುತ್ತಾರೆ.

### ಸುಳ್ಳು ಸುದ್ದಿಗಳು ?

ಈ ಜಮೀನಿನ ಪಕ್ಕದಲ್ಲಿ ಸುಧಾಕರ ಎಂಬ ಮಾಜಿ ಯೋಧರಿಗೆ 10 ಎಕರೆ ಭೂಮಿ ಮಂಜೂರಾಗಿದ್ದು ಅವರ ಪರವಾಗಿ ಅದನ್ನು ಕೃಷಿ ಮಾಡಿಸುತ್ತಿರುವ ನಾಗೇಶಗೌಡ ಎಂಬವರ ಬಗ್ಗೆ ಈ ಆರೋಪ. ಇದನ್ನು ಪಟೇಲರೇ ಊರೆಲ್ಲ ಹಬ್ಬಿಸಿರುವುದೆನ್ನುವ ದಲಿತರು ಈ ಬಗ್ಗೆ ಬಹಳ ಕೋಪಗೊಂಡಿದ್ದಾರೆ. ನಾಗೇಶ ಗೌಡರು ನಮಗೆ ಪ್ರಾಮಾಣಿಕವಾಗಿ ಸಹಾಯ ಮಾಡಿದ್ದಾರೆ. ಈ ಜಮೀನನ್ನು ನಾವೇ, ನಮಗಾಗಿಯೇ ಕೇಳುತ್ತಿರುವುದು ಯಾರಿಗೂ ಇದನ್ನು ನಾವ್ಯಾಕೆ ಕೊಡುತ್ತೇವೆ? ಎಂದು ಅವರು, ಇಂಥ ಸುಳ್ಳು ಸುದ್ದಿಗಳ ಬಗ್ಗೆ ಕಿಡಿ ಕಾರುತ್ತಾರೆ.

ಸುಳ್ಳು ಸುದ್ದಿ ಇಷ್ಟೇ ಅಲ್ಲ. ನಮಗೆ ಬೆಂಬಲ ಕೊಡುತ್ತಿರುವ ರಾಜಪ್ಪ ಗೌಡ, ನಾರಾಯಣ ಗೌಡ, ರವೀಶ್ ಮುಂತಾದವರ ಬಗ್ಗೆಯೂ ಹೀಗೇ ರಿಪೋರ್ಟನ್ನೇ ಬರೆಸಿ, ಈ ದೌರ್ಜನ್ಯಕ್ಕೆ ದಾಖಲೆ ಸೃಷ್ಟಿಸಿದ್ದಾರೆ. ಇದರಲ್ಲಿ ಸ್ಥಳೀಯ ಗ್ರಾಮ ಲೆಕ್ಕಿಗ ಕಾಳಾಚಾರಿ ಮತ್ತು ತಹಸೀಲ್ದಾರರು ಪೂರಾ ಶಾಮೀಲಾಗಿದ್ದಾರೆ ಎಂದು ಅವರು ಹೇಳುತ್ತಾರೆ.

### ತಹಸೀಲ್ದಾರ್ ವಿವರಣೆ

ತಹಸೀಲ್ದಾರರನ್ನು "ಇಂಥ ದೌರ್ಜನ್ಯ ನಡೆಸುವ ತುರ್ತು ಏನಿತ್ತು? ಜಿ. ಪ. ಸದಸ್ಯರು, ಮಂಡಲ ಪ್ರಧಾನರುಗಳು ಎಲ್ಲರೂ ಕೇಳಿದಂತೆ ಸ್ವಲ್ಪ ಸಾವಧಾನದಿಂದ ಬಗೆಹರಿಸಬಹುದಿತ್ತಲ್ಲ ? ಎಷ್ಟೆಂದರೂ ಭೂರಹಿತರ ಸಮಸ್ಯೆ ತಾನೆ ?" ಎಂದು ಕೇಳಿದೆವು.

ಅದಕ್ಕವರು, "ದೌರ್ಜನ್ಯವೇನೂ ಇಲ್ಲ. ಭ್ರಷ್ಟಾಚಾರವೂ ಇಲ್ಲ. ಕಾನೂನಿನಂತೆ ಕ್ರಮ ತೆಗೆದುಕೊಂಡಿದ್ದೇವೆ. ಅಕ್ರಮ ಸಾಗುವಳಿ ಎಂದ ಮೇಲೆ ಕಾನೂನು ಬಾಹಿರವೇ. ಅದೂ ಜಿಲ್ಲಾಧಿಕಾರಿಗಳೇ ಬಾಳೆಹೊನ್ನೂರಿಗೆ ಬಂದಿದ್ದಾಗ ಈ ಬಗ್ಗೆ ಕೆಲವರು ಅರ್ಜಿ ಕೊಟ್ಟರು. ಅದಕ್ಕವರು, 'ಯಾಕೆ ಇನ್ನೂ ಕ್ರಮ ತೆಗೆದುಕೊಂಡಿಲ್ಲ ? ಸರ್ಕಾರಿ ಜಾಗವನ್ನು ರಕ್ಷಣೆ ಮಾಡಿ' ಎಂದು ನನಗೆ ಆದೇಶಿಸಿದರು. ಆದ್ದರಿಂದಲೇ ಕ್ರಮ ತೆಗೆದುಕೊಳ್ಳಬೇಕಾಯಿತು" ಎಂದರು.

ಪ್ರಶ್ನೆ : ಆದರೆ ಸ.ನಂ. 14ರಲ್ಲಿ ಹೆಚ್ಚಿನಂಶ ಭೂಮಿಯೆಲ್ಲ ಒತ್ತುವರಿ ಆಗಿದೆ, ಈಗಲೂ ಆಗುತ್ತಿದೆ. ಅದರ ಬಗೆಗೆಲ್ಲ ಇಲ್ಲದ ತುರ್ತು ಇಲ್ಲಿ ಯಾಕೆ ?

ತಹಸೀಲ್ದಾರ್ : ಈ ಪ್ರಕರಣದಲ್ಲಿ ಸಾರ್ವಜನಿಕರಿಂದ ಪಿಟಿಶನ್ ಬಂದಿದೆ. ಬೇರೆಯವರದಕ್ಕೆ ಯಾವುದೂ ಬಂದಿಲ್ಲ.

ಪ್ರಶ್ನೆ : ಪಟೇಲರು ಹರಿಜನರ ಭೂಮಿಗೆ ಬೇಲಿ ಹಾಕಿಕೊಂಡಿದ್ದಾರೆಂಬ ಬಗ್ಗೆ ಗ್ರಾಮಸಭೆಯಲ್ಲಿ ನಿಮಗೆ ದೂರು ನೀಡಿದ್ದಕ್ಕೆ ತೆರವು ಮಾಡುವಂತೆ ಹೇಳಿದಿರಷ್ಟೆ ? ಮಾಡಿಸಿದಿರಾ ? ಪಟೇಲರ ಸಂಬಂಧಿ ಅಪ್ಪಾಜಿಗೌಡ ಎಂಬವರು ಬನ್ನೂರು ಪಂಚಾಯ್ತಿ ಕಚೇರಿ ಹಿಂಭಾಗದಲ್ಲಿ ಪಂಚಾಯ್ತಿಯ 2 ಎಕರೆ ಜಾಗ ಅಕ್ರಮ ಸಾಗುವಳಿ ಮಾಡಿದ್ದಾರೆಂದು ಗ್ರಾಮಸ್ಥರು ದೂರು ನೀಡಿದ್ದಾರಂತಲ್ಲ. ಖುಲ್ಲಾ ಆಗಿದೆಯಾ ?

ತಹಸೀಲ್ದಾರ್ : ಹರಿಜನರು ಪುನಃ ಅರ್ಜಿಯನ್ನೇನೂ ಕೊಟ್ಟಿಲ್ಲ. ಕೊಟ್ಟಿದ್ದರೆ ಖುಲ್ಲಾ ಮಾಡಿಸುತ್ತಿದ್ದೆ. ಈ ಇನ್ನೊಂದು ವಿಚಾರದಲ್ಲಿ ನನಗೆ ಯಾವ ದೂರೂ ಬಂದಿಲ್ಲ.

.... .... ....

ಅಪ್ಪಾಜಿಗೌಡರ ಒತ್ತುವರಿಯ ವಿಚಾರದಲ್ಲಿ ಸ್ಥಳೀಯರು ತಹಸೀಲ್ದಾರರಿಗೆ ಮಾತ್ರವಲ್ಲ, ಜಿಲ್ಲಾಧಿಕಾರಿಗಳಿಗೇ ಬರೆದಿದ್ದಾರಂತೆ. ಆದರೂ ಒಂದು ವಿಚಾರಣೆ ಕೂಡ ನಡೆದಿಲ್ಲವಂತೆ.

### ಭೂಮಿ ದಾಹ : ಎರಡು ಬಗೆ

ಹೀಗೆ ವಿವಾದಾತ್ಮಕ ಅಂಶಗಳು ಹಲವಾರು. ಒಟ್ಟಿನಲ್ಲಿ ಇಷ್ಟೇ—ಸುತ್ತಮುತ್ತಲೆಲ್ಲೂ ಸರ್ಕಾರಿ ರೆವಿನ್ಯೂ ಭೂಮಿ ಇಲ್ಲದಿರುವಾಗ ಇದೊಂದು ಬೃಹತ್ ಸ. ನಂ. ಪೂರ್ತಿ ಸಾಗುವಳಿಗೆ ಲಭ್ಯವಿರುವ ಭೂಮಿಯಾಗಿದೆ. ಅದರಲ್ಲಿ ಸಾಧ್ಯವಿದ್ದಷ್ಟೂ ಕಬಳಿಸಿಕೊಂಡಿರುವವರಿಗೆ ಉಳಿದಿರುವ ಚೂರು–ಪಾರಿನ ಮೇಲೂ ಆಸೆಯೇನೋ ! ಆದರೆ ಏನೂ ಭೂಮಿಯಿಲ್ಲದ 'ಜೋಮನ ಸಂತತಿ'ಯವರಿಗೆ, "ನಮಗಂತೂ ಜೀವಮಾನ ಪೂರ್ತಿ ಕೂಲಿಯೇ ಬದುಕಾಯಿತು. ಈಗ ಸರ್ಕಾರದ ಕಡ್ಡಾಯದಿಂದಾಗಿ ನಮಗೆ ಇರುವ ಒಂದೋ ಎರಡೋ ಮಕ್ಕಳಿಗಾದರೂ ಒಂದೋ ಎರಡೋ ಎಕರೆ ಭೂಮಿ ತಮ್ಮದೂ ಅಂತ ಇರಲಿ" ಎಂಬ ಸ್ವಾಭಾವಿಕ ದಾಹ.

ಈ ಉಳ್ಳವರ ಮತ್ತು ಇಲ್ಲದವರ ಹಿತಾಸಕ್ತಿಗಳ ಘರ್ಷಣೆಯಲ್ಲಿ ಅಧಿಕಾರ ಶಾಹಿ ತನ್ನ ಹಿತಾಸಕ್ತಿಗನುಗುಣವಾಗಿ ಉಳ್ಳವರ ಪರ ವಹಿಸಿದರೆ, ಅವರಿಂದ ಈ ಹಿಂದೆ ಅನ್ಯಾಯಕ್ಕೊಳಗಾದವರೆನ್ನುವ ಕೆಲ ಯುವಕರು ಇಲ್ಲದವರ ಬೆಂಬಲಕ್ಕೆ ನಿಂತಿದ್ದಾರೆ.

ಈ ದೌರ್ಜನ್ಯ ಮಾತ್ರ ಸ್ಥಳೀಯ ಮತ್ತು ಸುತ್ತಮುತ್ತಲಿನ ಸಾಮಾನ್ಯ ಜನತೆಗೆ, ಬಹಳ ನೋವನ್ನೂ ಅಸಮಾಧಾನವನ್ನೂ ಉಂಟು ಮಾಡಿರುವುದು ಕಾಣಬರುತ್ತದೆ.

ಅಧಿಕಾರ ಶಾಹಿ ಮತ್ತು ಶ್ರೀಮಂತಿಕೆಯ ಈ ದಬ್ಬಾಳಿಕೆಯಲ್ಲಿ ನಿರಪರಾಧಿ ಹರಿಜನರು, ಭೂಮಿ ಬಯಸಿದ್ದೇ ತಮ್ಮ ಅಪರಾಧವಾಗಿ, ದೌರ್ಜನ್ಯಕ್ಕೀಡಾಗಿದ್ದಾರೆ. ಆದರೂ ಸೆಟೆದು ನಿಲ್ಲುವ ಲಕ್ಷಣ ತೋರುತ್ತಿದ್ದಾರೆ. ಇನ್ನೊಂದು ಸಮಾಧಾನದ ಸಂಗತಿಯೆಂದರೆ, ಈ ಪ್ರಕರಣದಲ್ಲಿ ಪೋಲೀಸರು ಮತ್ತು ಅರಣ್ಯ ಇಲಾಖೆ ಸಿಬ್ಬಂದಿ 'ತಾಲ್ಲೂಕ್ ಮ್ಯಾಜಿಸ್ಟ್ರೇಟ್' ಆದ ತಹಸೀಲ್ದಾರ್ ಆದೇಶಿಸಿದ್ದಕ್ಕೆ ಭಾಗವಹಿಸಿದ್ದು ಬಿಟ್ಟರೆ ಬಹಳ ಸಂಯಮದಿಂದಲೇ ವರ್ತಿಸಿದ್ದಾರೆ.

ಸ್ಥಳೀಯ ಮಂಡಲ ಪ್ರಧಾನರಾದ ಫ್ರೆಡ್ರಿಕ್ ಡಿ' ಕುನ್ಹ, ಬಾಳೆಹೊನ್ನೂರು ವ.ಂ ಪ್ರಧಾನ ಕೆ. ಸಿ. ವೆಂಕಟೇಶ್ ಮತ್ತು ಸ್ಥಳೀಯ ಸ್ನೇಹಿತರನ್ನು ಈ ದಲಿತರು ಬಹಳ ಸ್ಮರಿಸುತ್ತಾರೆ.

### ರಕ್ಷಣೆಯೋ ? ದೌರ್ಜನ್ಯವೇ ?

ಈಗ ಶಾಸಕರೇನೋ ದಲಿತರಿಗೆ ರಕ್ಷಣೆಯ ಭರವಸೆ ಕೊಟ್ಟು, ಅವರು ಜಮೀನು ಮಂಜೂರು ಮಾಡುವಂತೆ ತಹಸೀಲ್ದಾರರಿಗೆ ಸೂಚಿಸಿದ್ದಾರಂತೆ. ಆದರೆ ಶಾಸಕರ ಈ ಹಿಂದಿನ ಸೂಚನೆ, ಮಾರ್ಗದರ್ಶನಗಳೆಲ್ಲವನ್ನೂ 'ಒಕ್ಕಲೆಬ್ಬಿಸು'ವುದರಲ್ಲಿ ಯಶಸ್ವಿಯಾದ ಆರ್ಥಿಕ, ರಾಜಕೀಯ ಮತ್ತು ಅಧಿಕಾರ ಶಾಹಿ ಶಕ್ತಿಗಳು 'ಕಾನೂನು ಪ್ರಕಾರ' ಎಂಬ ನೆಪದಲ್ಲಿ ದೌರ್ಜನ್ಯವನ್ನೇ ಮುಂದುವರಿಸುವರೆ? ಕಾದು ನೋಡಬೇಕು. ●

## ಕೊಪ್ಪ, ಶೃಂಗೇರಿಗೆ ನೂತನ ಸರ್ಕಾರಿ ಬಸ್ ಒದಗಿಸಿದ್ದಕ್ಕೆ
# ರಸ್ತೆ ಬಳಕೆದಾರರ ವೇದಿಕೆ ಅಭಿನಂದನೆ

ಬಾಳೆಹೊನ್ನೂರು : ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆಯ ಅತ್ಯಾವಶ್ಯಕ ಸಮಯದಲ್ಲಿ ಚಿಕ್ಕಮಗಳೂರಿನಿಂದ ಶೃಂಗೇರಿ ಮತ್ತು ಕೊಪ್ಪಕ್ಕೆ ರಾಜ್ಯ ರಸ್ತೆ ಸಾರಿಗೆ ಬಸ್‌ಗಳನ್ನು ಹೊಸದಾಗಿ ಏರ್ಪಾಡು ಮಾಡಿರುವ ಬಗ್ಗೆ ಸಾರಿಗೆ ಮಂತ್ರಿ ಸಿಂಧ್ಯ, ಟ್ರಾಫಿಕ್ ನಿರ್ದೇಶಕ ಸಲಗಾರ್, ಹಾಸನ ವಿಭಾಗ ನಿಯಂತ್ರಣಾಧಿಕಾರಿಗಳು ಮತ್ತು ಸಿಬ್ಬಂದಿ, ಚಿಕ್ಕಮಗಳೂರು ಜಿಲ್ಲಾಧಿಕಾರಿ, ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿ, ಲೋ. ಇಲಾಖೆ ಎ॥ ಇಂಜನಿಯರ್ ರಾಧಾಕೃಷ್ಣ ರೆಡ್ಡಿ, ಪ್ರಾದೇಶಿಕ ಸಾರಿಗೆ ಅಧಿಕಾರಿ ಭೀಮಣ್ಣ ನಾಯಕ್, ಜಿ. ಪ. ಸದಸ್ಯ ಎಸ್. ವಿ. ಮಂಜುನಾಥ್, ಜಿಲ್ಲಾ ಸಚಿವ ಬಿ. ಎಲ್. ಶಂಕರ್, ಶಾಸಕ ಗೋವಿಂದ ಗೌಡರು ಮುಂತಾದವರಿಗೆಲ್ಲ ಬಾಳೆಹೊನ್ನೂರಿನ ರಸ್ತೆ ಬಳಕೆದಾರರ ವೇದಿಕೆ ಸಂಚಾಲಕ ಶಂಕರನಾರಾಯಣ ಭಟ್ ಅಭಿನಂದನೆ ಸಲ್ಲಿಸಿದ್ದಾರೆ.

### ವೇಳಾಪಟ್ಟಿ

ಚಿಕ್ಕಮಗಳೂರು–ಶೃಂಗೇರಿ : 2 ದುಂಡು ಸುತ್ತು. 1) ಚಿಕ್ಕಮಗಳೂರಿನಿಂದ ಬೆಳಿಗ್ಗೆ 7.15ಕ್ಕೆ ಹೊರಟು 10 ಗಂಟೆಗೆ ಶೃಂಗೇರಿ. ಅಲ್ಲಿಂದ 10.45ಕ್ಕೆ ಹೊರಟು ಮ. 1.30ಕ್ಕೆ ಚಿಕ್ಕಮಗಳೂರು.

2) ಚಿಕ್ಕಮಗಳೂರಿಂದ ಮ 2.30ಕ್ಕೆ ಬಿಟ್ಟು ಸಂಜೆ 5.20ಕ್ಕೆ ಶೃಂಗೇರಿ. ಅಲ್ಲಿಂದ 6.45ಕ್ಕೆ ಬಿಟ್ಟು ರಾತ್ರಿ 9.15ಕ್ಕೆ ಚಿಕ್ಕಮಗಳೂರು.

3. ಕೊಪ್ಪ–ಸಕಲೇಶಪುರ : ಬೆಳಿಗ್ಗೆ 6.15ಕ್ಕೆ ಕೊಪ್ಪ ಬಿಟ್ಟು 9 30ಕ್ಕೆ ಚಿಕ್ಕಮಗಳೂರು, 11.15ಕ್ಕೆ ಸಕಲೇಶಪುರ. ಅಲ್ಲಿಂದ ಸಂಜೆ 4.30ಕ್ಕೆ ಬಿಟ್ಟು 6 45ಕ್ಕೆ ಚಿಕ್ಕಮಗಳೂರು, ರಾತ್ರಿ 9.30ಕ್ಕೆ ಕೊಪ್ಪ.

## ಬಹುಮಾನ ವಿತರಣೆ ಸಮಾರಂಭ

ಜಯಪುರ : ಇಲ್ಲಿನ ಮಂಗಳ ಕಲಾ–ಸಾಹಿತ್ಯ ವೇದಿಕೆ ಕನ್ನಡ ರಾಜ್ಯೋತ್ಸವದ ಅಂಗವಾಗಿ ಪ್ರೌಢಶಾಲೆ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ವರ್ಣ ಚಿತ್ರಕಲಾ ಸ್ಪರ್ಧೆಯ ಬಹುಮಾನ ವಿತರಣೆ ಸಮಾರಂಭ ನ. 27 ಎ. ಸಿ. ವಜ್ರಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಪ್ರೌಢಶಾಲಾ ಅಧ್ಯಾಪಕ ಅಶ್ವತ್ಥನಾರಾಯಣ ಬಹುಮಾನ ವಿತರಿಸಿದರು. ವೇದಿಕೆ ಅಧ್ಯಕ್ಷ ಕಲಬಿ ಶ್ರೀನಿವಾಸ್ ಮಾತನಾಡಿದರು. ಭಲೆಗೋಡು ನಾಗೇಶ್ ಸ್ವಾಗತಿಸಿ, ನಂಜುಂಡ ಗುಪ್ತ ವಂದಿಸಿದರು. ಶಂ. ನ. ಶೇಷಗಿರಿ ಕಾರ್ಯಕ್ರಮ ನಿರೂಪಿಸಿದರು.

## ಸಾರ್ವತ್ರಿಕ ಲಸಿಕಾ ತರಬೇತಿ ಶಿಬಿರ

ಕೊಪ್ಪ : ಇಲ್ಲಿನ ಸರ್ಕಾರಿ ಆಸ್ಪತ್ರೆಯ ಆಶ್ರಯದಲ್ಲಿ ಜಿಲ್ಲಾ ಪರಿಷತ್ ವತಿಯಿಂದ 2 ದಿನದ ಸಾರ್ವತ್ರಿಕ ಲಸಿಕಾ ತರಬೇತಿ ಶಿಬಿರ ಡಿ. 7 ಮತ್ತು 8 ರಂದು ನಡೆಯಿತು ಪಿ. ಜಿ. ಗುರ್ಜರ್‌ರವರ ಅಧ್ಯಕ್ಷತೆಯಲ್ಲಿ ಶಾಸಕ ಗೋವಿಂದ ಗೌಡರು ಶಿಬಿರವನ್ನು ಉದ್ಘಾಟಿಸಿದರು ಬಿ. ಜಿ. ಚಿದಂಬರ್, ಎಚ್. ಎಸ್. ಸುಮಿತ್ರಮ್ಮ ಮುಖ್ಯ ಅತಿಥಿಗಳಾಗಿದ್ದರು ಡಾ॥ ಪ್ರಸಾದ್ ಸ್ವಾಗತಿಸಿ, ಡಾ॥ ಸತೀಶ್ ವಂದಿಸಿದರು. ತಾಲ್ಲೂಕಿನ ಎಲ್ಲಾ ಕಡೆಗಳಿಂದ ಆರೋಗ್ಯ ಕಾರ್ಯಕರ್ತರುಗಳು ಶಿಬಿರದಲ್ಲಿ ಪಾಲ್ಗೊಂಡು ತರಬೇತಿ ಪಡೆದರು.

# ಕಿಗ್ಗದಲ್ಲಿ ಒಂದು ಸರಳ, ಅಂತರ್ಜಾತಿ ವಿವಾಹ

ಕಿಗ್ಗ : ಇಲ್ಲಿನ ಋಷ್ಯಶೃಂಗೇಶ್ವರ ದೇವಾಲಯದಲ್ಲಿ ಡಿ. 7ರಂದು ಅಂತರಜಾತಿ ಸರಳ ವಿವಾಹವೊಂದು ನೆಂಟರಿಷ್ಟರು ಮತ್ತು ವಧೂವರರ ಸ್ನೇಹಿತರ ಸಮ್ಮುಖದಲ್ಲಿ ಸಂಭ್ರಮದಿಂದ ನೆರವೇರಿತು. ಶೃಂಗೇರಿಗೆ ಸಮೀಪದ ಗಿಣಿಗಿಣಿಯ ಪಟೇಲರ ಮಗಳು ಉಷಾ ಮತ್ತು ಶೃಂಗೇರಿಯ ಅಪ್ಪು ಪೂಜಾರರ ಮಗ ಚಂದ್ರಶೇಖರ ಇವರೇ ನೂತನ ದಂಪತಿಗಳಾದವರು. ಸಮಾರಂಭಕ್ಕೆ ಎಲ್ಲಾ ಜಾತಿಗಳ ಯುವಕ ಮಿತ್ರರು ಅಪಾರ ಸಂಖ್ಯೆಯಲ್ಲಿ ಸೇರಿದ್ದರು.

ಹುಡುಗಿಗೆ ಅಣ್ಣನಾಗುವ ಜಯಪುರದ ವಿಜಯ್ ಜಾದೂಗಾರ್ ಮತ್ತು ಅವರ ಶ್ರೀಮತಿ ಮತ್ತು ಅವರ ಬಂಧುಗಳು ಈ ಪ್ರೇಮಿಗಳನ್ನು ಒಂದುಗೂಡಿಸಲು ಬಹಳ ಆಸ್ಥೆ ವಹಿಸಿದ್ದರು. ಅವರ ತಾಯಿ–ತಂದೆ ಮತ್ತು ಕುಟುಂಬ ವರ್ಗದವರು ಹಾಗೂ ಹುಡುಗನ ತಾಯಿ–ತಂದೆಗಳು ವಿವಾಹದ ವಿವಿಧ ಕಾರ್ಯಕ್ರಮಗಳಲ್ಲಿ ಸಂತೋಷದಿಂದ ಪಾಲ್ಗೊಂಡಿದ್ದರು

(ವರದಿ : ಪ್ರಭಾಕರ್, ತೆಂಗಿನಮನೆ)

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ